ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ವಿದ್ಯುತ್ ಉತ್ಪಾದನೆ ಬಗ್ಗೆ

ಶ್ರೀ ಸುನೀಲ್‌ಗೌಡ ಬಸನಗೌಡ ಪಾಟೀಲ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

562 (634) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳಿಂದ ಉತ್ಪಾದನೆ ಮಾಡುತ್ತಿರುವ ಒಟ್ಟು ವಿದ್ಯುತ್ ಉತ್ಪಾದನೆ ಎಷ್ಟು;

(ಆ) ನವೀಕರಿಸಬಹುದಾದ ವಿವಿಧ ಇಂಧನ ಮೂಲಗಳಾದ ಪವನ ವಿದ್ಯುತ್ ಯೋಜನೆ ಸೌರ ವಿದ್ಯುತ್ ಯೋಜನೆ ಜಲ ವಿದ್ಯುತ್ ಯೋಜನೆಗಳು ರಾಜ್ಯದ ಯಾವ ಯಾವ ಭಾಗಗಳಲ್ಲಿ ಪ್ರಸ್ತುತ ಚಾಲ್ತಿಯಲ್ಲಿವೆ;

(ಇ) ಈ ಯೋಜನೆಗಳಿಂದ ಎಷ್ಟು ಪ್ರಮಾಣದ ವಿದ್ಯುತ್ ಉತ್ಪಾದನೆ ಮಾಡಲಾಗುತ್ತಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಈ) ಉತ್ಪಾದನೆಯಾದ ವಿದ್ಯುತ್‌ಚ್ಛಕ್ತಿಯನ್ನು ಯಾವ ಬೆಲೆಯಲ್ಲಿ ಮಾರಾಟ ಮಾಡಲಾಗುತ್ತಿದೆ; ಕಳೆದ 03 ವರ್ಷಗಳಿಂದ ಈ ಉತ್ಪಾದನೆಯಿಂದ ಸರ್ಕಾರಕ್ಕೆ ಎಷ್ಟು ಪ್ರಮಾಣದ ಆದಾಯ ಬಂದಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಉ) ಸೌರ ವಿದ್ಯುತ್ ಯೋಜನೆಯ ಸಂಪೂರ್ಣ ಮಾಹಿತಿ ನೀಡುವುದು?